ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ

# ಸಾಮಾನ್ಯಜ್ಞಾನ

ಸಂಪುಟ 1 ಸಂಚಿಕೆ 11 ಮೇ 1983 ಪುಟ 16 75 ಪೈಸೆ

## "ಗಂಗಾ-ಕಾವೇರಿ"

ಭಾರತ ದೇಶದ ಜನ ಹಸಿವೆಯಿಂದ ಮಾತ್ರವಲ್ಲ, ಕುಡಿಯಲು ನೀರಿಗೂ ದರಿದ್ರರಾಗಿದ್ದಾರೆ. ಉತ್ತರ ಭಾರತದ ನದಿಗಳು ಮಳೆಗಾಲ ಮಾತ್ರವಲ್ಲ ಬೇಸಿಗೆಯಲ್ಲೂ ಬತ್ತದೆ ಸಂಮೃದ್ಧವಾಗಿ ಹರಿದು ಉತ್ತರ ಭಾರತದ ಸಹಸ್ರಾರು ಜನತೆಯನ್ನು ತಣಿಸುತ್ತಾ ಕೊನೆಗೆ ಸಮುದ್ರವನ್ನು ಸೇರುತ್ತವೆ. ಮಳೆಗಾಲದಲ್ಲಂತೂ ಭಾರತದ ಗಂಗಾ, ಬ್ರಹ್ಮಪುತ್ರ ನದಿಗಳು ತುಂಬಿದ ಪ್ರವಾಹದಿಂದ ಲಕ್ಷಾಂತರ ರೂ.ಗಳ ಆಸ್ತಿ-ಪಾಸ್ತಿಗಳ ನಷ್ಟವನ್ನುಂಟುಮಾಡುವುದರ ಜೊತೆಗೆ ಪ್ರಾಣ ಹಾನಿಯನ್ನೂ ಮಾಡುತ್ತವೆ. ಪ್ರವಾಹವನ್ನು ತಡೆಗಟ್ಟಲು ಸರಕಾರ ಮಾಡಿದ ಪ್ರಯತ್ನವೆಲ್ಲಾ ವಿಫಲವಾಗಿದೆ. ಈ ಹಿನ್ನೆಲೆಯಲ್ಲಿ ಭಾರತದ ಜನತೆ ಗಂಗಾ ನದಿಯನ್ನು ದಕ್ಷಿಣಕ್ಕೆ ಹರಿಸಿ, ಈ ಕಾವೇರಿಯನ್ನು ಕೂಡಿಸಿದರೆ ಈ ಜಲಕ್ಷಾಮವನ್ನು ಸಂಪೂರ್ಣವಾಗಿ ತಡೆಗಟ್ಟಿದಂತಾಗುತ್ತದೆ. ಆದರೆ ಈ ಕೆಲಸವನ್ನು ಮಾಡುವವರು ಯಾರು ? ಗಂಗಾ-ಕಾವೇರಿಯನ್ನು ಕೂಡಿಸುವ ಕೆಲಸಕ್ಕೆ ಕೋಟ್ಯಾಂತರ ರೂ.ಗಳು ಬೇಕಾಗುತ್ತದೆಯಾದರೂ ಇಡೀ ಭಾರತ ಸಮುದಾಯಕ್ಕೆ ಸಮೃದ್ಧ ಹಾಗೂ ಸಮರ್ಪಕವಾದ ಕೆಲಸವನ್ನು ಮಾಡಿದಂತಾಗುತ್ತದೆ.

ಈ ಕಾರ್ಯಕ್ಕಾಗಿ ಸತ್ಯಾಗ್ರಹಗಳು, ಹೋರಾಟಗಳು ನಡೆಯಬೇಕು. ಗಂಗಾ-ಕಾವೇರಿಯನ್ನು ಕೂಡಿಸಿಯೇ ತೀರುತ್ತೇವೆಂಬ ಛಲ, ನಿಷ್ಠೆ, ಪ್ರಯತ್ನ-ಸರಕಾರಕ್ಕಿಲ್ಲವಾದರೂ ಜನತೆ ಎಚ್ಚೆತ್ತು ತಾವೇ ಟೊಂಕ ಕಟ್ಟಿನಿಲ್ಲಬೇಕು. ಆಗ ಈ ಅರವತ್ತೆಂಟು

(2ನೇ ಪುಟ ನೋಡಿ)

ಸಂಪಾದಕ: ಕೊಂಡಜ್ಜಿ ಕೆ. ವೆಂಕಟೇಶ್

## ಮಾಸ ಚಿಂತನ

'ಸುಸಂಸ್ಕೃತವಾದ ಸಂತೋಷವನ್ನು ಒದಗಿಸುವುದೇ ಕಾವ್ಯದ ಕೆಲಸ'

—ಅರಿಸ್ಟಾಟಲ್

## ಪತ್ರಗಳು

ಮಾನ್ಯರೇ,

ತಮ್ಮ ಮಾಸ ಪತ್ರಿಕೆ 'ಸಾಮಾನ್ಯ ಜ್ಞಾನ'ವನ್ನು ಓದಿ ನನಗೆ ಆನಂದವಾಯಿತು. ಪತ್ರಿಕೆ ತುಂಬಾ ಉಪಯುಕ್ತವಾಗಿದೆ.

ಬೆಳಗಾವಿ —ಎಂ. ಜಿ. ಕುಲಕರ್ಣಿ

## ಒಳ ಪುಟಗಳಲ್ಲಿ



## ಗಂಗಾ-ಕಾವೇರಿ

(ಒಂದನೇ ಪುಟದಿಂದ)

ಕೋಟಿ ಉಸಿರಿನ ಬದುಕು ಸಾರ್ಥಕವಾಗುತ್ತದೆ-ಮಾತ್ರವಲ್ಲ, ಮುಂದಿನ ಪೀಳಿಗೆಗೆ ಶಾಶ್ವತ ವರದಾನವಾಗುತ್ತದೆ. ಇದಕ್ಕಾಗಿ ಎಲ್ಲ ಜನತೆಯ ತ್ಯಾಗ, ಶ್ರಮ ಅಗತ್ಯವಾಗಿ ಆಗಬೇಕು.

ಗಂಗಾ-ಕಾವೇರಿಯನ್ನು ಕೂಡಿಸುವ ಕಾರ್ಯದಿಂದ ಉತ್ತರ ಭಾರತದಲ್ಲಾಗುವ ಪ್ರವಾಹದ ನೀರನ್ನು ದಕ್ಷಿಣದಲ್ಲಿ ಜಲಾಶಯಗಳ ಮೂಲಕ ತಡೆದು ನೀರನ್ನು ಶೇಖರಿಸಬಹುದು. ಲಕ್ಷಾಂತರ ಹೆಕ್ಟೇರು ಬರಡು ಭೂಮಿಯನ್ನು ಸಮೃದ್ಧಗೊಳಿಸಬಹುದು.

ಇದಕ್ಕಾಗಿ ಉಪವಾಸ ನಡೆಯಬೇಕು, ಸತ್ಯಾಗ್ರಹ ನಡೆಯಬೇಕು, ಹೋರಾಟ ನಡೆಯಬೇಕು. —ಸಂ.

# ಭೂಗೋಳ

(ಕಳೆದ ಸಂಚಿಕೆಯಿಂದ)

## ಏಷ್ಯಾಖಂಡ

**ಮುಖ್ಯ ಪಟ್ಟಣಗಳು :** ದೆಹಲಿ, ಬೊಂಬಾಯಿ, ಕಲ್ಕತ್ತಾ. ಟೋಕಿಯೋ. ಢಾಕ್ಕಾ, ರಂಗೂನ್. ಬ್ಯಾಂಕಾಕ್, ಕೊಲೊಂಬೋ, ಪೀಕಿಂಗ್, ಶಾಂಘಾಯ್, ಇಸ್ಲಾಮಾಬಾದ್, ಜೆರುಸಲೇಂ, ಸಿಂಗಪೂರ್ ಮತ್ತು ರಂಗೂನ್.

**ಮುಖ್ಯ ನದಿಗಳು :** ಗಂಗಾ, ಬ್ರಹ್ಮಪುತ್ರ, ಸಿಂಧೂ, ಯಮುನಾ, ಯಾಂಗಸ್ಟಿಕೀ, ಹೊಯಾಂಗೋ ಇವು ಮುಖ್ಯ ನದಿಗಳು.

ಈ ಖಂಡದಲ್ಲಿ ಬೆಳ್ಳಿ, ಚಿನ್ನ. ಕಲ್ಲಿದ್ದಿಲು. ಕಲ್ಲೆಣ್ಣೆ, ಕಬ್ಬಿಣ, ಮ್ಯಾಂಗನೀಸ್, ಲಿಗ್ನೇಟ್ ಖನಿಜ ಸಂಪತ್ತು ಹೇರಳವಾಗಿದೆ. ಈ ಖಂಡದ ಬಹು ಭಾಗವು ಮಾನ್ಸೂನ್ ಮಾದರಿಯ ವಾಯುಗುಣವನ್ನು ಹೊಂದಿರುತ್ತದೆ.

**ಬೇಸಾಯ :** ಅಕ್ಕಿ, ರಾಗಿ, ಜೋಳ, ಕಾಫೀ, ಕಬ್ಬು, ಮತ್ತು ಗೋಧಿ ಇವು ಮುಖ್ಯ ಬೆಳೆಗಳು. ರಬ್ಬರ್, ಹತ್ತಿ, ಸೆಣಬು, ಬೀಟೆ, ತೇಗ, ಗಂಧ ಇವು ಅರಣ್ಯ ಸಂಪತ್ತು. ಇಲ್ಲಿ ಪೋರ್ಚುಗೀಸರು, ಭಾರತೀಯರು ಮತ್ತು ನೀಗ್ರೊ ಜನಾಂಗ ವಾಸಿಸುತ್ತಾರೆ.

## ಆಫ್ರಿಕಾ

**ಭೂ ಭಾಗ :** ಆಫ್ರಿಕಾ, ಪ್ರಪಂಚದಲ್ಲಿ ಎರಡನೇ ದೊಡ್ಡ ಖಂಡವಾಗಿದೆ. ಈ ಖಂಡವು ಉತ್ತರಕ್ಕೆ ಮೆಡಿಟರೇನಿಯನ್ ಸಮುದ್ರವು, ಪೂರ್ವಕ್ಕೆ ಅರಬ್ಬಿಸಮುದ್ರ ಮತ್ತು ಹಿಂದೂ ಮಹಾಸಾಗರವೂ. ಪಶ್ಚಿಮಕ್ಕೆ ಅಟ್ಲಾಂಟಿಕ್ ಸಾಗರವೂ ಹಾಗೂ ಈಶಾನ್ಯಕ್ಕೆ ಕೆಂಪು ಸಮುದ್ರ ಇವುಗಳಿಂದ ಸುತ್ತುವರಿದಿದೆ.

**ಮೇಲ್ಮೈ ಲಕ್ಷಣಗಳು :** ಆಫ್ರಿಕಾ ಖಂಡವನ್ನು ದಕ್ಷಿಣ ಪ್ರಸ್ಥಭೂಮಿ, ಅಟ್ಲಾಸ್ ಪರ್ವತಗಳು ಮತ್ತು ಸಹರಾ ಹಾಗೂ ಗಿನಿ ತೀರವೆಂದು ಸ್ವಾಭಾವಿಕ ವಿಭಾಗ ಗಳನ್ನಾಗಿ ವಿಂಗಡಿಸಲಾಗಿದೆ.

**ವಾಯುಗುಣ :** ಭೂಮಧ್ಯರೇಖೆಯು ಆಫ್ರಿಕಾ ದೇಶದ ಮಧ್ಯಭಾಗದಲ್ಲಿ ಹಾದುಹೋಗುವುದರಿಂದ ಈ ರೇಖೆಯ ಇಕ್ಕೆಲಗಳಲ್ಲಿ ಸುಮಾರು ಒಂದೇ ಬಗೆಯ ವಾಯುಗುಣವಿರುತ್ತದೆ.

**ನದಿಗಳು :** ನೈಲ್, ಕಾಂಗೊ, ಜಾಂಬೇಸಿ ಇವು ಪ್ರಮುಖ ನದಿಗಳು.

**ಎತ್ತರದ ಪರ್ವತ :** ಕಿಲಿಮಂಜರೊ ಆಫ್ರಿಕದ ಎತ್ತರವಾದ ಪರ್ವತ.

**ಖನಿಜ ಸಂಪತ್ತು :** ಆಫ್ರಿಕವು ಚಿನ್ನದ ಉತ್ಪಾದನೆಯಲ್ಲಿ ಅಗ್ರಸ್ಥಾನ ಪಡೆದಿದೆ. ಚಿನ್ನ, ವಜ್ರ ಮತ್ತು ತಾಂಮ್ರ ಇಲ್ಲಿನ ಪ್ರಮುಖ ಖನಿಜ ಸಂಪತ್ತು.

**ವ್ಯವಸಾಯ :** ಆಫ್ರಿಕವು ವಿಶ್ವದಲ್ಲಿ ಎರಡನೇ ದೊಡ್ಡ ಖಂಡವಾದರೂ ವ್ಯವಸಾಯಕ್ಕೆ ಭೂಮಿಯು ಪ್ರಯೋಜನವಾಗಿಲ್ಲ. ಆದರೂ ಕಣಿವೆಯ ಬಯಲು ಪ್ರದೇಶಗಳಲ್ಲಿ ಬೇಸಾಯ ಮಾಡಲಾಗುವುದು. ಗೋಧಿ, ಆಲೀವ್, ಹುಲ್ಲು, ಮೆಕ್ಕೆ ಜೋಳ, ತೆಂಗು, ಕಡಲೆಕಾಯಿ, ಕಾಫೀ, ಹತ್ತಿ ಇವು ಆಫ್ರಿಕದ ಮುಖ್ಯ ಬೆಳೆಗಳು.

**ಆಫ್ರಿಕಾ ಖಂಡದ ಪ್ರಮುಖ ದೇಶಗಳು :** ಈಜಿಪ್ಟ್, ಆಲ್ಜೀರಿಯಾ, ಸೂಡಾನ್, ಮೊರಾಕ್ಕೋ, ಸೈಬೀರಿಯಾ, ನೈಜರೆ. ಛಾಡ್, ಕೆನ್ಯಾ, ಸೋಮಾರಿಯ, ಕಾಂಗೋ, ಈಥಿಯೋಪಿಯಾ, ಝಾಂಬಿಯಾ, ದಕ್ಷಿಣ ಆಫ್ರಿಕ, ಅಂಗೋಲ, ನೈರುತ್ಯ ಆಫ್ರಿಕ, ಸಿಂಜಿವೇ, ಟ್ರಾನ್ ಸೇವಿಯಾ, ಘಾನಾ, ಮ್ಯಾಂಬೀನಿಯ, ಲಿಬಿಯಾ ಇವು ಪ್ರಮುಖ ದೇಶಗಳು.

**ಪ್ರಮುಖ ಪಟ್ಟಣಗಳು :** ಕೈರೋ, ಕೇಪಟನ್, ಉಸಾಕಾ, ನೈರೋಬಿ, ಸಾಲಿನ್‌ಬರಿ, ಮೊಂಬಸ್ ಮತ್ತು ಪ್ರಿಟೋರಿಯಾ.

## ದಕ್ಷಿಣ ಅಮೇರಿಕ

ದಕ್ಷಿಣ ಅಮೆರಿಕವು ದಕ್ಷಿಣ ಭೂಭಾಗದ ಪಶ್ಚಿಮದಲ್ಲಿದೆ. ಈ ಖಂಡದ ಪಶ್ಚಿಮ ದಿಕ್ಕಿನಲ್ಲಿ ಪೆಸಿಫಿಕ್ ಸಾಗರ, ಪೂರ್ವಕ್ಕೆ ಅಟ್ಲಾಂಟಿಕ್ ಸಾಗರ ಮತ್ತು ಉತ್ತರ ದಿಕ್ಕಿನಲ್ಲಿ ಕೆರೆಬಿಯನ್ ಸಮುದ್ರಗಳು ಇವೆ.

**ಮುಖ್ಯ ದೇಶಗಳು :** ಬ್ರೆಜಿಲ್, ವೆನಿಜೂಲ, ಬೊಲಿವಿಯಾ, ಪರಾಗ್ವೆ, ಉರುಗ್ವೆ, ಅರ್ಜೆಂಟೈನಾ, ಚಿಲಿ, ಈಕ್ವಡಾರ್, ಪೆರು ಮತ್ತು ಗಯಾನ ಇವು ದಕ್ಷಿಣ ಅಮೇರಿಕದ ದೇಶಗಳು.

**ನದಿಗಳು :** ಅಮೆಜಾನ್, ಪರಾನ, ಪರಗ್ವೆ ಮತ್ತು ಓರಿನೋಕೋ ಇವು ದಕ್ಷಿಣ ಅಮೇರಿಕದ ಮುಖ್ಯ ನದಿಗಳು.

**ಖನಿಜ ಸಂಪತ್ತು :** ಚಿನ್ನ, ಬೆಳ್ಳಿ, ವಜ್ರ, ತಾಮ್ರ, ಟಿನ್ ಇವು ಮುಖ್ಯ ಖನಿಜಗಳು.

**ಮುಖ್ಯ ಪಟ್ಟಣಗಳು :** ರಯೋ–ಡಿ–ಜನೈರೋ, ಬಗೋಟಾ, ಲಾವಾಜಿ, ಟ್ರೈನಿದಾದ್, ಟ್ಯೂನೋಸ್ ಏರೀಸ್, ಬ್ರೆಸೀಲಿಯಾ ಇವು ಮುಖ್ಯ ನಗರಗಳು.

## ಯುರೋಪ್ ಖಂಡ

ಯುರೋಪು ಖಂಡವು ಪ್ರಪಂಚದಲ್ಲಿ ಎರಡನೇ ಚಿಕ್ಕ ಖಂಡ. ಇದು ಏಷ್ಯಾಖಂಡದ ಪಶ್ಚಿಮ ಭಾಗಕ್ಕೆ ಹಬ್ಬಿದೆ. ಈ ಖಂಡದ ಪಶ್ಚಿಮಕ್ಕೆ ಅಟ್ಲಾಂಟಿಕ್ ಸಾಗರವೂ, ದಕ್ಷಿಣಕ್ಕೆ ಮೆಡಿಟರೇನಿಯನ್ ಸಮುದ್ರವೂ ಮತ್ತು ಉತ್ತರಕ್ಕೆ ಶೀತಸಾಗರವೂ ಹಬ್ಬಿದೆ.

**ಮುಖ್ಯ ಪ್ರದೇಶಗಳು :** ಸ್ಪೇಯಿನ್, ಪೋರ್ಚುಗಲ್, ಫ್ರಾನ್ಸ್, ಬ್ರಿಟೀಶ್ ದ್ವೀಪಗಳು, ಜರ್ಮನಿ, ಹಂಗೇರಿ, ರುಮೇನಿಯಾ, ಸ್ವೀಡನ್, ಪೋಲೆಂಡ್, ಯುಗೋಸ್ಲಾವಿಯಾ, ರಷ್ಯ, ನೆದರ್ಲಾಂಡ್, ವಿಯೆನ್ನಾ, ಜಕೋಸ್ಲೊವಾಕಿಯಾ, ಇಟಲಿ, ಸ್ವಿಟ್ಜರ್ಲೆಂಡ್, ಆಸ್ಟ್ರಿಯಾ, ಆಲ್ಬೇನಿಯಸ್, ಬೆಲಿಜಿಯಾ, ಡೆನ್ಮಾರ್ಕ್, ಹಾಲೆಂಡ್, ರಷ್ಯಾ ಇವು ಯೂರೋಪ್ ಖಂಡದ ಮುಖ್ಯ ದೇಶಗಳು.

**ವಾಯುಗುಣ :** ಈ ಖಂಡದಲ್ಲಿ ಬೇಸಿಗೆಯು ಹೆಚ್ಚು ಉಷ್ಣಾಂಶವನ್ನು ಹೊಂದಿರುತ್ತದೆ. ಮತ್ತು ಈ ಕಾಲದಲ್ಲಿ ಮಳೆ ಇರುವುದಿಲ್ಲ. ಆದರೆ ಇಲ್ಲಿ ಚಳಿಗಾಲದಲ್ಲಿ ಮಳೆಯಾಗುತ್ತದೆ.

**ಕೈಗಾರಿಕೆಗಳು :** ಮೀನುಗಾರಿಕೆ, ಕಬ್ಬಿಣ, ಕಾಗದ, ಪೆಟ್ರೋಲಿಯಂ, ಕೈಗಾರಿಕಾ ಉಪಕರಣಗಳು ಮದ್ಯ ಹಾಲು ಮತ್ತು ಹಾಲಿನ ಉತ್ಪಾದನೆಗಳು.

**ವ್ಯವಸಾಯ :** ಆಲೂಗಡ್ಡೆ, ದ್ರಾಕ್ಷಿ, ಹಣ್ಣು, ಮತ್ತು ಸಿಹಿಗಡ್ಡೆ (ಶುಗರ್ ಬೀಟ) ಇವು ವ್ಯವಸಾಯ ಉತ್ಪನ್ನಗಳು.

**ಮುಖ್ಯ ನಗರಗಳು :** ಲಂಡನ್, ಪ್ಯಾರೀಸ್, ರೋಂ, ಮಾಸ್ಕೋ, ಮಾಡ್ರಿಡ್, ಬಾನ್.

**ಮುಖ್ಯ ನದಿ :** ವೋಲ್ಗ.

## ಉತ್ತರ ಅಮೇರಿಕ

ಉತ್ತರ ಅಮೇರಿಕವು ಪಶ್ಚಿಮಾರ್ಧಗೋಳದ ಉತ್ತರ ಭಾಗದಲ್ಲಿದೆ. ಉತ್ತರ ಅಮೆರಿಕದ ಉತ್ತರ ಭಾಗಕ್ಕೆ ಶೀತ ಸಾಗರವೂ, ಪೂರ್ವಕ್ಕೆ ಅಟ್ಲಾಂಟಿಕ್ ಸಾಗರವೂ, ಪಶ್ಚಿಮದಲ್ಲಿ ಶಾಂತಿ ಸಾಗರವೂ ಇದೆ. ಉತ್ತರ ಅಮೇರಿಕದಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನಗಳೂ, ಕೆನಡಾ, ಅಲಾಸ್ಕಾ ಮತ್ತು ಮೆಕ್ಸಿಕೋ ಈ ಸ್ವತಂತ್ರರಾಷ್ಟ್ರಗಳು ಇವೆ.

**ಸ್ವಾಭಾವಿಕ ಸಸ್ಯವರ್ಗ :** ಉತ್ತರ ಅಮೇರಿಕದ ಉಷ್ಣವಲಯದಲ್ಲಿ ನಿತ್ಯ ಹರಿದ್ವರ್ಣ ಕಾಡುಗಳಿವೆ. ಓಕ್, ಪೈನ್, ಆಶ್, ಬೀಚ, ಮೇಪಲ್ ಬರ್ಜ್, ಹೆಮ್‌ಲಾಕ್, ಆಲೀವ್ ಇವು ಉತ್ತರ ಅಮೆರಿಕದ ಮುಖ್ಯ ಮರಗಳು. ಈ ಸ್ವಾಭಾವಿಕ ಸಸ್ಯವರ್ಗಗಳು ಹೆಚ್ಚು ಬೆಲೆಯುಳ್ಳ ಹಾಗೂ ಪ್ರಯೋಜನಕಾರಿಯಾಗಿವೆ. ನದಿಗಳು ಚಳಿಗಾಲದಲ್ಲಿ ಹಿಮದಿಂದ ಕೂಡಿರುವುದರಿಂದ ಬೇಸಾಯಕ್ಕೆ ಹೆಚ್ಚು ಅನುಕೂಲವಿಲ್ಲ. ಆದರೆ ಕೆಲವು ಕಡೆಗಳಲ್ಲಿ ಮಾತ್ರ ಬೇಸಾಯವನ್ನು ಮಾಡಲಾಗುವುದು. ಮಿಸ್ಸಿಸ್ಸಿಪ್ಪಿ, ಮೆಕ್‌ನೆಜ್, ಕೊಲೋರೆಡೋ ಇವು ಉತ್ತರ ಅಮೆರಿಕದ ಪ್ರಮುಖ ನದಿಗಳು. ಚಿನ್ನ, ತಾಮ್ರ, ಬೆಳ್ಳಿ, ವಜ್ರ ಹೇರಳವಾಗಿ ಪೆಟ್ರೋಲಿಯಂ ಇವೇ ಮೊದಲಾದ ಖನಿಜ ಸಂಪತ್ತಿನಿಂದ ಕೂಡಿರುವ ಉತ್ತರ ಅಮೇರಿಕವು (ಮುಖ್ಯವಾಗಿ ಯು.ಎಸ್-ಎ) ಕೈಗಾರಿಕೆಯಲ್ಲೂ ಮುಂದುವರಿದಿದೆ.

(ಮುಂದುವರಿಯುವುದು)

# ನಿಮಗೆ ಗೊತ್ತೆ ?

1. 1981 ರಲ್ಲಿ ವಿಶ್ವದ ಜನ ಸಂಖ್ಯೆ ಎಷ್ಟು ?
ಅ) 4508 ಮಿಲಿಯನ್ ಆ) 5408 ಮಿ. ಇ) 8045 ಮಿ.
2: 1982 ಮೂರನೇ ವಿಶ್ವದ ಬಹುಮಾನ ವಿಜೇತ ಯಾರು ?
ಅ) ನರ್ರೈರೇ ಆ) ಬೆನ್ ಕಿಂಗ್‌ಸ್ಲೆ ಇ) ಡಾ॥ ಎಂ.ಎಸ್. ಸ್ವಾಮಿನಾಥನ್
3. ಮಾರ್ಚ್ 16, 1983 ರಲ್ಲಿ ನಡೆದ 'ಗಫಾರ್ ಕಪ್' ಏಷ್ಯಾ ದೇಶಗಳ ಟೆನಿಸ್ ಚಾಂಪಿಯನ್‌ಶಿಪ್ ಯಾವ ದೇಶಕ್ಕೆ ಲಭಿಸಿತು.
ಅ) ಚೀಣಾ, ಆ) ಭಾರತ ಇ) ಕೊಲಲಂಪೂರ್
4. 1960 ಕ್ಕೆ ಅನ್ವಯಿಸುವಂತೆ ಒಂದು ರೂಪಾಯಿ ಬೆಲೆ ಜನವರಿ 1983ರಲ್ಲಿ ಎಷ್ಟು ಇದ್ದಿತು ?
ಅ) 20.20 ಪೈ ಆ) 27 ಪೈ ಇ) 25.20 ಪೈ
5. ಕಾರ್ಲ್‌ಮಾರ್ಕ್ಸ್‌ನ ಮರಣ ದಿನ ?
ಅ) ಮಾರ್ಚ್ 14, 1983 ಆ) ಜನವರಿ 30, 1948
ಇ) ಮಾರ್ಚ್ 15, 1983
6. ದಾಸ್ ಕ್ಯಾಪಿಟಲ್ ಬರೆದವರು ಯಾರು ?
ಅ) ವಿ. ದಾಸ್‌ಗುಪ್ತ ಆ) ಕಾರ್ಲ್‌ಮಾರ್ಕ್ಸ್ ಇ) ಅಬ್ರಾಹಂ ಲಿಂಕನ್
7. ಆರ್ಯಭಟ ಯಾರು ?
ಅ) ಉಪಗ್ರಹ ಆ) ಭಾರತದ ಖಗೋಳಶಾಸ್ತ್ರಜ್ಞ ಇ) ಸಸ್ಯಶಾಸ್ತ್ರಜ್ಞ
8. ಎಸ್.ಎಲ್.ವಿ.–ಈ ಬಾಹ್ಯಾಕಾಶ ನೌಕೆಯನ್ನು ಯಾವ ಕೇಂದ್ರದಿಂದ ಹಾರಿಸಲಾಯಿತು.
ಅ) ಕೆನಡಿ ಬಾಹ್ಯಾಕಾಶ ಕೇಂದ್ರ ಆ) ಶ್ರೀಹರಿ ಕೋಟಾ ಇ) ಹಾಸನ
9. ಭಾರತದ ಪ್ರಥಮ ನೊಬೆಲ್ ಪಾರಿತೋಷಕ ವಿಜೇತ ಯಾರು ?
ಅ) ರವೀಂದ್ರನಾಥ ಠಾಗೋರ್ ಆ) ಸಿ. ವಿ. ರಾಮನ್
ಇ) ಮದರ್ ಥರೇಸಾ
10. ಎಂಟು ಆಸ್ಕರ್ ಪ್ರಶಸ್ತಿ ಪಡೆದ ಸಿನಿಮಾ ಯಾವುದು ?
ಅ) ಮಿಸ್ಸಿಂಗ್ ಆ) ಗಾಂಧಿ ಇ) ಟ್ರೋಟ್‌ಸ್ಸೆ
11. ಅಂತರರಾಷ್ಟ್ರೀಯ ಓಲಂಪಿಕ್ ಕೂಟದ ಅಧ್ಯಕ್ಷ ಯಾರು ?
ಅ) ಬೂಟಾಸಿಂಗ್ ಆ) ಜೆ. ಎನ್. ಸಮರಂಚ್

ಇ) ಎ. ಎ. ಗ್ರೊಮೈಕೋ

12. 1982 ರ 'ವಿಂಬಲ್ಡನ್ ಕಿಂಗ್' ಯಾರು ?

ಅ) ಜಿಮ್ಮಿಕ್ಯಾನರ್ಸ್ ಆ) ಮೆಕೆನ್ರೋ ಇ) ಪ್ರಕಾಶ್ ಪಡುಕೋಣೆ

13. ಆಸ್ಟ್ರೇಲಿಯಾ ದೇಶದ ಪ್ರಧಾನಮಂತ್ರಿ ಯಾರು ?

ಅ) ಜೂಲಿಯಸ್ ನೈರೇರೆ ಆ) ಬಾಬ್ ಹಾಕೆ ಇ) ಇ.ಎಂ. ಸೊಕೊನೇ

14. ಮೂರನೇ ಅಲಿಪ್ತ ರಾಷ್ಟ್ರಗಳ ಶೃಂಗ ಸಭೆ ಎಲ್ಲಿ ನಡೆಯಿತು ?

ಅ) ದೆಹಲಿ ಆ) ಲುಸುಕಾ ಇ) ಕೈರೋ

15. ಭೂಮಿಯು ಸೂರ್ಯನ ಸುತ್ತಲೂ ಸುತ್ತುವುದಕ್ಕೆ ಏನೆಂದು ಕರೆಯುತ್ತಾರೆ?

ಅ) ಪರಿಕ್ರಮಣ ಆ) ಪರಿಭ್ರಮಣ ಇ) ಗ್ರಹಣ

16. ಭೂಪಥ ಎಂದರೇನು ?

ಅ) ಸೂರ್ಯನ ಸುತ್ತಲೂ ಭೂಮಿ ಸುತ್ತಿ ಬರುವ ಮಾರ್ಗ

ಆ) ಅಕ್ಷಾಂಶಗಳು ಇ) ಪರಿಕ್ರಮಣ

17. ಭಾರತದ ಸ್ವಾತಂತ್ರ್ಯ ದಿನ ಎಂದು ಆಚರಿಸಲಾಗುತ್ತದೆ.

ಅ) ಆಗಸ್ಟ್ 15 ಆ) ಆಗಸ್ಟ್ 25 ಇ) ನವಂಬರ್ 14

18. ಮಹಾತ್ಮಾ ಗಾಂಧೀಜಿ ಯಾವಾಗ ದಂಡೀ ಯಾತ್ರೆ ನಡೆಸಿದರು ?

ಅ) 1947 ಆ) 1948 ಇ) 1930

19. ಭೂ ಭಾಗಗಳನ್ನು ಎಷ್ಟು ಖಂಡಗಳನ್ನಾಗಿ ವಿಂಗಡಿಸಲಾಗಿದೆ.

ಅ) 4 ಆ) 6 ಇ) 8

20. ಪ್ರಪಂಚದ ಅತಿ ದೊಡ್ಡ ಗ್ರಂಥಾಲಯ ಯಾವುದು ?

ಅ) ಲೈಬ್ರರಿ ಆಫ್ ಕಾಂಗ್ರೆಸ್ ಆ) ಬ್ರಿಟೀಷ್ ಲೈಬ್ರರಿ

ಇ) ಆಕ್ಸ್‌ಫರ್ಡ್ ಲೈಬ್ರರಿ

21. ಭಾರತದ ಅತಿದೊಡ್ಡ ಬಂದರು ಯಾವುದು ?

ಅ) ಬೊಂಬಾಯಿ ಆ) ಮಂಗಳೂರು ಇ) ಕಲ್ಕತ್ತ

22. ನಾಗಾರ್ಜುನ ಸಾಗರ ಜಲಾಶಯವನ್ನು ಯಾವ ನದಿಗೆ ಅಡ್ಡಲಾಗಿ ಕಟ್ಟಲಾಗಿದೆ?

ಅ) ಕೃಷ್ಣಾ ಆ) ಗೋದಾವರಿ ಇ) ಸಿಂಧೂ

23. ಕನ್ನಂಬಾಡಿ ಕಟ್ಟೆಯನ್ನು ಯಾವ ನದಿಗೆ ಅಡ್ಡಲಾಗಿ ಕಟ್ಟಲಾಗಿದೆ ?

ಅ) ಕಾವೇರಿ ಆ) ತುಂಗಾ ಇ) ಗಂಗಾ

24. ಪ್ರಪಂಚದ ಅತಿ ಉದ್ದವಾದ ಅಣೆಕಟ್ಟು ಯಾವುದು ?

ಅ) ಹಿರಾಕುಡ್ ಆ) ಭಕ್ರಾನಂಗಲ್ ಇ) ಕನ್ನಂಬಾಡಿ

25. ಶ್ರೀ ಶೈಲಂ ಹೈಡ್ರೊ ಎಲೆಕ್ಟ್ರಿಕ್ಟ್ ಪ್ರಾಜೆಕ್ ಯಾವ ರಾಜ್ಯದಲ್ಲಿದೆ ?
ಅ) ಆಂಧ್ರ ಪ್ರದೇಶ ಆ) ಕರ್ನಾಟಕ ಇ) ಒರಿಸ್ಸಾ
26. ಶರಾವತಿ ಹೈಡ್ರೋ ಎಲೆಕ್ಟ್ರಿಕ್ ಪ್ರಾಜೆಕ್ಟ್ ಯಾವ ರಾಜ್ಯದಲ್ಲಿದೆ ?
ಅ) ಕರ್ನಾಟಕ ಆ) ಆಂಧ್ರ ಇ) ಅಸ್ಸಾಂ
27. ಬಿ. ಇ. ಎಲ್. ಎಲ್ಲಿದೆ ?
ಅ) ಬೆಂಗಳೂರು ಆ) ಮದರಾಸು ಇ) ಬಾಂಬೆ
28. ಹಿಂದೂಸ್ಥಾನ್ ಶಿಪ್ ಯಾರ್ಡ್ ಎಲ್ಲಿದೆ ?
ಅ) ದೆಹಲಿ ಆ) ಬೊಂಬಾಯಿ ಇ) ವಿಶಾಖಪಟ್ಣ
29. ಎಚ್.ಎ.ಎಲ್. ಎಲ್ಲಿದೆ ?
ಅ) ಬೆಂಗಳೂರು ಆ) ಮದರಾಸು ಇ) ಬಾಂಬೆ
30. ಸ್ಕೂಟರ್ಸ್ ಇಂಡಿಯಾ ಲಿಮಿಟೆಡ್ ಎಲ್ಲಿದೆ ?
ಅ) ಲಕ್ನೊ ಆ) ದೆಹಲಿ ಇ) ಬೆಂಗಳೂರು
31. ಭಾರತ ಯಾವ ಖಂಡದಲ್ಲಿದೆ ?
ಅ) ಅಮೆರಿಕ ಆ) ಆಸ್ಟ್ರೇಲಿಯಾ ಇ) ಏಷ್ಯಾ
32. ಭಾರತದ ಪ್ರಧಾನ ಮಂತ್ರಿ ಯಾರು ?
ಅ) ಇಂದಿರಾಗಾಂಧಿ ಆ) ಮಹಾತ್ಮಗಾಂಧೀ ಇ) ಮೊರಾರ್ಜಿ ದೇಸಾಯಿ
33. 13ನೇ ಜ್ಞಾನಪೀಠ ಪ್ರಶಸ್ತಿ ವಿಜೇತರು ಯಾರು ?
ಅ) ದ.ರಾ. ಬೇಂದ್ರೆ ಆ) ಇಂದಿರಾಗಾಂಧಿ ಇ) ಶಿವರಾಮಕಾರಂತರು.
34. ಗೋಮಟೇಶ್ವರ ಮೂರ್ತಿಯನ್ನು ಕೆತ್ತಿದವರು ಯಾರು ?
ಅ) ಅಮರಶಿಲ್ಪಿ ಜಕಣಾಚಾರಿ ಆ) ಅರಿಷ್ಟನೇಮಿ
ಇ) ಚಾವುಂಡರಾಯ
35. ಭಾರತದ ಪ್ರಥಮ ಸ್ವಾತಂತ್ರ ಸಂಗ್ರಾಮ ಯಾವಾಗ ನಡೆಯಿತು?
ಅ) 1957 ಆ) 1947 ಇ) 1857
36. ಉಕ್ಕಿನ ಮನುಷ್ಯ ಎಂದು ಯಾರನ್ನು ಕರೆಯುತ್ತಿದ್ದರು ?
ಅ) ಜವಹರಲಾಲ್ ನೆಹರು ಆ) ಹಿಟ್ಲರ್ ಇ) ವಲ್ಲಭಭಾಯಿ ಪಟೇಲ್
37. ಆಮ್ಲಜನಕವನ್ನು ಕಂಡು ಹಿಡಿದವರಾರು ?
ಅ) ಜೇಮ್ಸ್‌ವ್ಯಾಟ್ ಆ) ಪ್ಯರಡೆ ಇ) ಜೋಸೆಫ್ ಪ್ರೀಸ್ಲೆ
38. ಬ್ರಹ್ಮ ಸಮಾಜದ ಸ್ಥಾಪಕರು ಯಾರು ?
ಅ) ದಯಾನಂದ ಸರಸ್ವತಿ ಆ) ಬಾಲಗಂಗಾಧರ ತಿಲಕ್
ಇ) ರಾಜಾರಾಮ ಮೋಹನರಾಯ

39. ಆರ್ಯಸಮಾಜ ಸ್ಥಾಪಕರಾರು ?
ಅ) ದಯಾನಂದ ಸರಸ್ವತಿ ಆ) ಗಾಂಧೀಜಿ ಇ) ಆರ್ಯರು

40. ಡಿಸ್ಕವರಿ ಆಫ್ ಇಂಡಿಯಾ ಬರೆದವರು ಯಾರು ?
ಅ) ಜವಹರಲಾಲ್ ನೆಹರು ಆ) ಮಹಾತ್ಮಗಾಂಧಿ
ಇ) ಡಾ॥ ಶಿವರಾಮ ಕಾರಂತ

41. ಭಾರತದ ಇಂದಿನ ಶ್ರೇಷ್ಠ ನ್ಯಾಯಾಧೀಶರು ಯಾರು ?
ಅ) ಶಾಂತಿಭೂಷಣ ಆ) ಎ. ಎನ್. ರೇ ಇ) ವೈ. ವಿ. ಚಂದ್ರಚೂಡ

42. ಬ್ರಿಟಿಷ್ ಪಾರ್ಲಿಮೆಂಟಿನ ಪ್ರಥಮ ಭಾರತೀಯ ಸದಸ್ಯನಾರು ?
ಅ) ಜವಹರಲಾಲ್ ನೆಹರು ಆ) ಪಟೇಲ್ ಇ) ದಾದಾಭಾಯಿನವರೋಜಿ

43. ರಷ್ಯಾ ಕ್ರಾಂತಿ ಯಾವ ವರ್ಷದಲ್ಲಿ ನಡೆಯಿತು ?
ಅ) 1817 ಆ) 1717 ಇ) 1917

44. 11 ನೇ ಕಾಮನ್‌ವೆಲ್ತ್ ಕ್ರೀಡೆಯಲ್ಲಿ ಪ್ರಥಮ ಚಿನ್ನದ ಪದಕವನ್ನು ಪಡೆದವರು ಯಾರು ?
ಅ) ಪ್ರಕಾಶ್ ಪಡುಕೋಣೆ ಆ) ಈಗತೂರು ಕರುಣಾಕರ್ರ
ಇ) ಅಜಿತ್ ಕುಮಾರ್

45. ರೇಡಿಯೋ ಕಂಡು ಹಿಡಿದ ವಿಜ್ಞಾನಿ ಯಾರು ?
ಅ) ರೈಟ್ ಸಹೋದರರು ಆ) ಎಡ್ವರ್ಡ್ ಜನ್ನರ್ ಇ) ಮಾರ್ಕೋನಿ

46. ಬಾಂಗ್ಲಾ ದೇಶದ ಸ್ಥಾಪಕ ಯಾರು ?
ಅ) ಇಂದಿರಾಗಾಂಧೀ ಆ) ಜೆಡ್. ಎ. ಭುಟ್ಟೋ
ಇ) ಷೇಕ್ ಮುಜೀಬುರ್ ರೆಹಮಾನ್

47. "ಮೈಕ್ರೋಫೋನ್" ಕಂಡು ಹಿಡಿದ ವಿಜ್ಞಾನಿ ಯಾರು ?
ಅ) ಅಲೆಗ್ಸಾಂಡರ್ ಗ್ರಹಾಂಬೆಲ್ ಆ) ಫ್ರಾನ್ಸಿಸ್ ಸ್ಮಿತ್
ಇ) ಲೂಯಿ ಪ್ಯಾಶ್ಚರ್

48. "ಟೆಲಿಫೋನ್" ಕಂಡು ಹಿಡಿದ ವಿಜ್ಞಾನಿ ಯಾರು ?
ಅ) ಅಲೆಕ್ಸಾಂಡರ್ ಗ್ರಹಾಂಬೆಲ್ ಆ) ಮಾರ್ಕೋನಿ
ಇ) ಡೋಪ

49. "ಜಲಾಂತರ್ಯಾಮಿ" (ಸಬ್‌ಮರೈನ್) ಕಂಡುಹಿಡಿದವರು ಯಾರು ?
ಅ) ಡೇವಿಡ್ ಬುಶ್ನೆಲ್ ಆ) ರೈಟ್ ಬ್ರದರ್ಸ್ ಇ) ಡೆನಿಪನ್

50. ಈಸ್ಟ್ ಇಂಡಿಯಾ ಕಂಪನಿ ಯಾವ ವರ್ಷದಲ್ಲಿ ಸ್ಥಾಪಿತಗೊಂಡಿತು ?
ಅ) 1600 ಆ) 1800 ಇ) 1500

51. ತ್ರಿವಲ್ಗರ್ ಕದನ ಯಾವ ವರ್ಷದಲ್ಲಿ ನಡೆಯಿತು ?
ಅ) 1705 ಆ) 1805 ಇ) 1920

52. ಪ್ರಪಂಚದ ಪ್ರಥಮ ಮಹಾಯುದ್ಧ ಯಾವಾಗ ಪ್ರಾರಂಭವಾಯಿತು ?
ಅ) 1724 ಆ) 1914 ಇ) 1628

53. ಕ್ರಿಸ್ತ ಹುಟ್ಟಿದ ವರ್ಷ ಯಾವುದು ?
ಅ) ಕ್ರಿಸ್ತಪೂರ್ವ 4 ಆ) ಕ್ರಿಸ್ತಶಕ 4 ಇ) ಕ್ರಿಸ್ತಪೂರ್ವ 1

54. ಭಾರತಕ್ಕೆ ಯಾವಾಗ ಸ್ವಾತಂತ್ರ್ಯ ಲಭಿಸಿತು ?
ಅ) 1947 ಆ) 1887 ಇ) 1268

55. ಗಾಂಧೀಜಿಯವರ ಕೊಲೆಯಾದುದು ಯಾವಾಗ ?
ಅ) 1948 ಆ) 1860 ಇ) 1947

56. ಯು. ಎನ್. ಓ ಯಾವಾಗ ಸ್ಥಾಪಿಸಲಾಯಿತು ?
ಅ) 1946 ಆ) 1945 ಇ) 1935

57. ಹುಯನ್‌ತ್ಸಾಂಗ್ ಯಾವ ದೇಶದ ಯಾತ್ರಿಕ ?
ಅ) ಚೀಣ ಆ) ಅಮೆರಿಕ ಇ) ಇಂಗ್ಲೆಂಡ್

58. "ಬ್ರಿಟಿಷರೆ ಭಾರತದಿಂದ ತೊಲಗಿ" ಈ ಮಾತು ಯಾವ ವರ್ಷದಲ್ಲಿ ಕೇಳಿ ಬಂತು ?
ಅ) 1932 ಆ) 1842 ಇ) 1942

59. 1978 ನೊಬೆಲ್ ಶಾಂತಿ ಪಾರಿತೋಷಕವನ್ನು ಹಂಚಿಕೊಂಡವರು ಯಾರು ?
ಅ) ಗಾಂಧೀಜಿ ಮತ್ತು ನೆಹರು ಆ) ಅನ್ವರ್ ಸಾದತ್ ಮತ್ತು ಬೆಗಿನ್
ಇ) ಜಯಪ್ರಕಾಶ್ ನಾರಾಯಣ್ ಮತ್ತು ಮೊರಾರ್ಜಿ ದೇಸಾಯಿ

60. ಲೋಕಸಭೆಯ ಅವಧಿ ಎಷ್ಟು ವರ್ಷಗಳು ?
ಅ) ಹತ್ತು ವರ್ಷಗಳು ಆ) ಇಪ್ಪತ್ತೈದು ವರ್ಷಗಳು
ಇ) ಐದು ವರ್ಷಗಳು

## ಉತ್ತರ

1–ಅ, 2–ಇ, 3–ಅ, 4–ಅ, 5–ಅ, 6–ಆ, 7–ಆ, 8–ಆ, 9–ಅ, 10–ಆ, 11–ಆ, 12–ಅ, 13–ಆ, 14–ಆ, 15–ಆ, 16–ಅ, 17–ಅ, 18–ಇ, 19–ಆ, 20–ಅ, 21–ಅ, 22–ಅ, 23–ಅ, 24–ಅ, 25–ಅ, 26–ಅ, 27–ಅ, 28–ಇ, 29–ಅ, 30–ಅ, 31–ಇ, 32–ಅ, 33–ಇ, 34–ಆ, 35–ಇ, 36–ಇ, 37–ಇ, 38–ಇ, 39–ಅ, 40–ಅ, 41–ಇ,

42–ಇ, 43–ಇ. 44–ಆ, 45–ಇ, 46–ಇ, 47–ಅ, 48–ಅ, 49–ಅ, 50–ಅ, 51–ಆ, 52–ಅ, 53–ಅ, 54–ಅ, 55–ಅ, 56–ಅ, 57–ಅ, 58–ಇ, 59–ಆ, 60–ಇ.

## ಕಳೆದ ತಿಂಗಳ 'ನಿಮಗೆ ಗೊತ್ತೆ'ಗಾಗಿ ಉತ್ತರ

1–ಇ. 2–ಅ, 3–ಆ, 4–ಇ, 5–ಇ, 6–ಇ, 7–ಆ, 8–ಇ, 9–ಇ, 10–ಇ, 11–ಇ, 12–ಇ, 13–ಇ, 14–ಇ, 15–ಅ, 16–ಆ, 17–ಇ. 18–ಇ, 19–ಅ, 20–ಅ, 21–ಇ, 22–ಇ, 23–ಆ, 24–ಆ. 25–ಇ, 26–ಆ, 27–ಇ, 28–ಆ, 29–ಆ, 30–ಅ.

---

## ವ್ಯಕ್ತಿ ವಿಶೇಷ

**ಅಲೆಗ್ಸಾಂಡರ್ ಗ್ರಹಾಂಬೆಲ್ (1847 ರಿಂದ 1922)** ಅಮೆರಿಕದ ವಿಜ್ಞಾನಿ. ತನ್ನ ಪ್ರೇಯಸಿಗೆ ಕಿವಿ ಕೇಳಿಸುವ ಯಂತ್ರದ ಅನ್ವೇಷಣೆಗೆ ಶ್ರಮಿಸಿ. ಶ್ರವಣ ಸಾಧನವನ್ನು ಕಂಡುಹಿಡಿದನು. ಅಲ್ಲದೆ ಇಂದು ವಿಶ್ವದ ಮೂಲೆ ಮೂಲೆಯಲ್ಲೂ ಪ್ರತಿಧ್ವನಿಸುತ್ತಿರುವ ಟೆಲಿಫೋನ್ ಸಾಧನವನ್ನು 1876ರಲ್ಲಿ ಮೊದಲ ಬಾರಿಗೆ ಸಿದ್ಧಪಡಿಸಿದನು.

**ಅರವಿಂದರು (1872 ರಿಂದ 1950)** ತಮ್ಮ ಲೇಖನಗಳು ಹಾಗೂ ಭಾಷಣಗಳ'ಮೂಲಕ ಭಾರತದ ಸ್ವಾತಂತ್ರ್ಯ ಪೂರ್ವದಲ್ಲಿ ಭಾರತೀಯರಿಗೆ ಸ್ವಾತಂತ್ರ್ಯದ ಹುಚ್ಚೆಬ್ಬಿಸಿ, ಹುರಿದುಂಬಿಸಿದವರಲ್ಲಿ ಶ್ರೀ ಅರವಿಂದ ಘೋಷರೂ ಒಬ್ಬರು. ಹುಟ್ಟಿನಿಂದಲೂ ಇಂಗ್ಲ ಭಾಷೆಯನ್ನೇ ಕಲಿತು, ಸ್ವದೇಶಾಭಿಮಾನ ಮೂಡಿದ ಮೇಲೆ ಬ್ರಿಟೀಷ್ ಸರಕಾರದ ವಿರುದ್ಧ ಹೋರಾಡಿ, ಕೊನೆಗೆ ಆಧ್ಯಾತ್ಮಿಕ ಲೋಕಕ್ಕಿಳಿದು ಧರ್ಮ ಪ್ರಚಾರಕರಾದ ಘನವಂತರು ಶ್ರೀ ಅರವಿಂದರು.

**ಅಬ್ದುಲ್ ಫಜಲ್** (1551–1602) ಈತನು ಅಕ್ಬರ್ ಚಕ್ರವರ್ತಿಯ ಸ್ನೇಹಿತನೂ ಹಾಗೂ ಮಂತ್ರಿಯೂಗಿದ್ದನು. 'ಅಕ್ಬರ್‌ನಾಮ' ಮತ್ತು 'ಐನ್–ಇ–ಅಕ್ಬಾರಿ' ಎಂಬ ಗ್ರಂಥಗಳನ್ನು ರಚಿಸಿದನು. ಅಕ್ಬರನ ಮಗ ಸಲೀಮನಿಂದ ಈತನ ಕೊಲೆಯಾಯಿತು.

**ಅಕ್ಬರ್** (1556–1605) ಅಕ್ಬರ್ ಮೊಗಲ್ ವಂಶದ ಚಕ್ರವರ್ತಿ. ಶ್ರೇಷ್ಠ

ಆಡಳಿತಗಾರ ಮತ್ತು "ದಿನ್–ಇಲ್ಲಾ–ಹಿ" ಮತ ಸ್ಥಾಪಕ. ಎಲ್ಲ ಧರ್ಮಗಳನ್ನು ಸಮನಾಗಿ ಕಂಡು ವೈಭವದಿಂದ ರಾಜ್ಯವಾಳಿದ ಭಾರತದ ಕೆಲವೇ ಮಂದಿ ರಾಜರುಗಳ ಸಾಲಿಗೆ ನಿಲ್ಲಬಲ್ಲ ಭೂಪಾಲಕ.

**ಅಲೆಕ್ಸಾಂಡರ್** (ಕ್ರಿ. ಪೂರ್ವ 356 ರಿಂದ 323) ಈತನು ಗ್ರೀಕ್ ದೇಶದ ಪರಾಕ್ರಮಿ. ಈತನು ಕ್ರಿ. ಪೂ: 327ರಲ್ಲಿ ಭಾರತಕ್ಕೆ ದಂಡೆತ್ತಿ ಬಂದನು. ಪುರೂರವ ರಾಜನನ್ನು ಸೋಲಿಸಿದ ಅಲೆಕ್ಸಾಂಡರ್ ಸ್ವದೇಶಕ್ಕೆ ಹಿಂದಿರುಗುವಾಗ (ಆಗ ಅವನಿಗೆ ಮೂವತ್ತು ಮೂರು ವರ್ಷ ವಯಸ್ಸು) ಬೆಬಿಲೋನ್ ಎಂಬಲ್ಲಿ ಮೃತನಾದನು.

**ಅಂಬೇಡ್ಕರ್ ಬಿ. ಆರ್.** (1893–1956) ಅಂಬೇಡ್ಕರ್ ಹರಿಜನ ಮುಖಂಡರು ಅವರು ಸ್ವತಂತ್ರ ಭಾರತ ಸಂವಿಧಾನ ರಚನಾ ಮಂಡಲಿಯ ಅಧ್ಯಕ್ಷ ರಾಗಿದ್ದು, ಸಂವಿಧಾನ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿದ್ದರು.

**ಅಶೋಕ ಚಕ್ರವರ್ತಿ** (ಕ್ರಿ. ಪೂ. 273 ರಿಂದ 232) ಅಶೋಕ ಚಕ್ರವರ್ತಿ ಇಡೀ ಭಾರತವನ್ನೇ ಆಳಬೇಕೆಂಬ ಮಹತ್ವಾಕಾಂಕ್ಷೆ ಉಳ್ಳವನಾಗಿದ್ದ ಶ್ರೇಷ್ಠ ರಾಜ. ಧರ್ಮ ರಕ್ಷಕ. ಕಳಿಂಗ ದೇಶದ ಮೇಲಿನ ಯುದ್ಧದ ನಂತರ ಯುದ್ಧಕ್ಕೆ ತಿಲಾಂಜಲಿ ಇತ್ತು ಬೌದ್ಧ ಧರ್ಮ ಪ್ರಚಾರ ಮಾಡಿದನು.

**ಆಡಾಲ್ಫ್ ಹಿಟ್ಲರ್** (1889 ರಿಂದ 1945) ಹಿಟ್ಲರ್ ಜರ್ಮನಿಯ ಸರ್ವಾಧಿಕಾರಿ. ಪ್ರಪಂಚದ ಎರಡನೇ ಮಹಾಯುದ್ಧದ ಕಾರಣೀ ಭೂತನಾದವನು ಹಿಟ್ಲರ್. 1945ರಲ್ಲಿ ಆತನು ಆತ್ಮಹತ್ಯೆ ಮಾಡಿಕೊಂಡನು.

**ಅಲ್ಲಾ ಉದ್ದೀನ್ ಖಿಲ್ಜಿ** ಈತನು ಖಿಲ್ಜಿ ವಂಶದ ಬಲಿಷ್ಠ ಚಕ್ರವರ್ತಿ. ಸುಮಾರು ಇಪ್ಪತ್ತು ವರ್ಷಗಳ ಕಾಲ ಉತ್ತರ ಭಾರತವನ್ನು ಆಳಿದ ಖಿಲ್ಜಿಯು ತನ್ನ ವಂಶದಲ್ಲೇ ಶ್ರೇಷ್ಠ ರಾಜನೆನಿಸಿಕೊಂಡನು.

**ಅನ್ವರ್ ಸಾದತ್** ಇವರು ಈಜಿಪ್ಟಿನ ಮಾಜೀ ಅಧ್ಯಕ್ಷರು. ಈಜಿಪ್ಟ್ ಮತ್ತು ಇಸ್ರೇಲ್ ನಡುವೆ ರಾಜಿ ಮಾಡಿಕೊಂಡು. ಶಾಂತಿ ಸ್ಥಾಪಿಸಿದ್ದುದಕ್ಕಾಗಿ ಇವರು ಇಸ್ರೇಲ್ ಪ್ರಧಾನಿಯೊಂದಿಗೆ 1978 ರ ನೊಬೆಲ್ ಶಾಂತಿಪಾರಿತೋಷಕ ವನ್ನು ಹಂಚಿಕೊಂಡರು.

**ಅಖಿಲಾಂಡನ್** ಇವರು ತಮಿಳು ಬರಹಗಾರರು. ಇವರ "ಚಿಟ್ಟಿರಾಪ್ಪಾವೈ" ಪುಸ್ತಕಕ್ಕೆ ಭಾರತೀಯ ಜ್ಞಾನಪೀಠ ಪ್ರಶಸ್ತಿ ಲಭಿಸಿತು.

**ಅಲ್ಬರ್ಟ್ ಏಬ್ರಾಹಾಂ ಮೈಕೇಲ್ಸನ್** ಈತನು ಅಮೆರಿಕದ ಭೌತ ವಿಜ್ಞಾನಿ. ನೋಬೆಲ್ ಪಾರಿತೋಷಕ ವಿಜೇತ.

**ಆ್ಯಂಡ್ರೂಸ್** ಸ್ವಾತಂತ್ರ ಹೋರಾಟಗಾರರೊಂದಿಗೆ 1904 ರಿಂದ ಭಾರತ ದಲ್ಲಿ ನೆಲೆಸಿ ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿದ ಬ್ರಿಟಿಷ್ ದೇಶದವನು.

**ಆಂಟೋಣಿ** (ಕ್ರಿ.ಪೂ. 83–30) ಜೂಲಿಯಸ್ ಸಿಜರ್‌ನ ಬೆಂಬಲಿಗ. ಆತನು ಸಿಜರನ ಮರಣಾನಂತರ ಬ್ರಿಟಿಷ್ ವಿರುದ್ಧ ಹೋರಾಡಿದವನು.

**ಆರ್ಕಿಮಿಡೀಸ್** (ಕ್ರಿ. ಪೂ. 476–520) : ಆರ್ಕಿಮಿಡೀಸನು ಗ್ರೀಕ್ ದೇಶದ ವಿಜ್ಞಾನಿ. ಆತನು ತೇಲುವ ವಸ್ತುಗಳ ಸಿದ್ಧಾಂತವನ್ನು ಕಂಡುಹಿಡಿದನು.

**ಆರ್ಯಭಟ** (ಕ್ರಿ. ಶ. 476–520) : ಆರ್ಯಭಟನು ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ ಖಗೋಳ ಶಾಸ್ತ್ರಜ್ಞ. ಆತನ ಹೆಸರಿನಲ್ಲಿ ಭಾರತೀಯರು ತಮ್ಮ ಮೊದಲ ಉಪಗ್ರಹವನ್ನು ಈಚೆಗೆ ಉಡಾಯಿಸಿದರು.

**ಆ್ಯನಿಬೆಸೆಂಟ್** (1856–1933) ಆ್ಯನಿಬೆಸೆಂಟ್ ಐರಿಷ್ ದೇಶದ ಮಹಿಳೆ. ಆಕೆ ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ್ದಳು. ಜೊತೆಗೆ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ನ ಅಧ್ಯಕ್ಷೆಯಾಗಿದ್ದಳು.

**ಆ್ಯಡಂ ಸ್ಮಿತ್** ಈತನು ಅರ್ಥಶಾಸ್ತ್ರದ ಪಿತಾಮಹ.

**ಆದ್ಯ ರಂಗಾಚಾರ್ಯ** ಇವರು ಕನ್ನಡದ ಪ್ರಸಿದ್ಧ ನಾಟಕಕಾರರು.

(ಮುಂದುವರಿಯುವುದು)

---



---

Editor & Publisher : Kondajji K. Venkatesh, 216, Subramanya Nagar, Bangalore-21. Printers : Chetana Printers, L–82, L. N. Puram, Bangalore–560 021.

# ನೂತನ ಸರ್ಕಾರದ ನೂರು ದಿನಗಳು: ದೃಢನಿಲುವು-ದಿಟ್ಟ ಹೆಜ್ಜೆ

ಜನತೆ ನಮಗಿತ್ತಿರುವ ಆದೇಶ, ಅಧಿಕಾರಗಳ ನಿಜವಾದ ಅರ್ಥ—ಈವರೆಗೆ ನೀಡಿದ ಆಶ್ವಾಸನೆಗಳ ಈಡೇರಿಕೆ.

ಈ ನೂರು ದಿನಗಳ ಅವಧಿಯಲ್ಲಿ ಮೂಲಭೂತ ಸ್ವರೂಪದ ಪ್ರಗತಿಪರ ನಿರ್ಧಾರಗಳನ್ನು ಕೈಗೊಂಡು ಜನತೆಗಿತ್ತ ವಚನ ಪಾಲನೆಗೆ ನೂತನ ಸರ್ಕಾರ ಪಣತೊಟ್ಟಿದೆ.

ಜನತೆಯ ಆಶೋತ್ತರಗಳ ಸಾಧನೆಯ ಗುರಿಯತ್ತ ನಿಮ್ಮ ಸರ್ಕಾರ ಮಹತ್ವಪೂರ್ಣ ಹೆಜ್ಜೆ ಇಟ್ಟಿದೆ.

ಆಡಳಿತಾಧಿಕಾರದ ವಿಕೇಂದ್ರೀಕರಣಕ್ಕೆ ಬದ್ಧವಾದ ನೂತನ ಸರ್ಕಾರ ಎಲ್ಲ ನಗರ ಕಾರ್ಪೊರೇಷನ್ನುಗಳು, ಪುರಸಭೆಗಳು ಹಾಗೂ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ನಡೆಸಲಿದೆ.

ಹರಿಜನ. ಗಿರಿಜನ ಹಾಗೂ ಹಿಂದುಳಿದ ವರ್ಗಗಳ ಶ್ರೇಯೋಭಿವೃದ್ಧಿಗಾಗಿ ಹಿಂದುಳಿದ ವರ್ಗಗಳ ಆಯೋಗ ಮತ್ತು ಅಲ್ಪಸಂಖ್ಯಾತರ ಆಯೋಗವನ್ನು ರಚಿಸಿದೆ.

ಹರಿಜನ–ಗಿರಿಜನರ ಯುವಜನಾಂಗದ ಪ್ರತಿಭಾ ಪುರಸ್ಕಾರಕ್ಕಾಗಿ ಪ್ರಾಯಶಃ ದೇಶದಲ್ಲೇ ಪ್ರಥಮವಾದ ವಿನೂತನ ಕ್ರಮವನ್ನು ಕೈಗೊಳ್ಳಲಾಗಿದೆ. ಅದರಂತೆ ರಾಜ್ಯದ ವಿಶ್ವವಿದ್ಯಾನಿಲಯಗಳಿಂದ. ವಿವಿಧ ವಿಷಯಗಳಲ್ಲಿ ಪದವಿ ಪಡೆದ 87 ಪ್ರತಿಭಾವಂತ ವಿದ್ಯಾರ್ಥಿಗಳನ್ನು ಪ್ರತಿ ವರ್ಷ ಕರ್ನಾಟಕ ಸರ್ಕಾರದ ಅಧಿಕಾರಿ ವರ್ಗಕ್ಕೆ ನೇರವಾಗಿ ನೇಮಿಸಿಕೊಳ್ಳಲಾಗುವುದು.

'ಅಂತ್ಯೋದಯ'—ರಾಜ್ಯದ ಪ್ರತಿ ಹಳ್ಳಿಯಲ್ಲಿ ಐದು ಕಡುಬಡ ಕುಟುಂಬಗಳನ್ನು ಆಯ್ಕೆ ಮಾಡಿ, ಅವರಿಗೆ ಸ್ವಾವಲಂಬಿಗಳಾಗಲು ಎಲ್ಲ ಸೌಲಭ್ಯ ಒದಗಿಸಿ, ಬಡತನದ ರೇಖೆಯಿಂದ ಮೇಲೆತ್ತುವ ಕ್ಷೇಮಾಭ್ಯುದಯ ಯೋಜನೆ.

ಕಾರ್ಮಿಕರ ಕನಿಷ್ಠ ವೇತನದ ಪರಿಷ್ಕರಣೆ. ಮೇ ತಿಂಗಳ ಒಂದನೇ ತಾರೀಖು ಸಂಬಳ ಸಹಿತ ರಜೆ.

ಬಹು ದಿನಗಳ ಬೇಡಿಕೆ, ವೃತ್ತಿ ತೆರಿಗೆಯ ರದ್ದು. ತಿಂಗಳಿಗೆ 1200 ರೂಪಾಯಿಗಿಂತ ಕಡಿಮೆ ವೇತನ ಪಡೆಯುವವರು ಮತ್ತು ವರ್ಷಕ್ಕೆ ನಲವತ್ತು ಸಾವಿರ ರೂಪಾಯಿಗಿಂತ ಕಡಿಮೆ ವಹಿವಾಟು ಮಾಡುವ ವ್ಯಾಪಾರಸ್ಥರು ಇನ್ನು ಮುಂದೆ ವೃತ್ತಿ ತೆರಿಗೆ ಕೊಡಬೇಕಾಗಿಲ್ಲ.

ಬೆಲೆ ಏರಿಕೆಯನ್ನು ತಡೆಯಲು ಪರಿಣಾಮಕಾರಿ ಕ್ರಮ. ನ್ಯಾಯಬೆಲೆ ಅಂಗಡಿಗಳ ಮೂಲಕ ಮಾರಾಟ ಮಾಡುವ ಎಲ್ಲ ದರ್ಜೆಯ ಅಕ್ಕಿಯ ಬೆಲೆಯನ್ನು ಗಣನೀಯವಾಗಿ ಕಡಿಮೆ ಮಾಡಲಾಗಿದೆ.

ರೈತರ ಮುಂದಿರುವ ಹಲವಾರು ಸಮಸ್ಯೆಗಳ ನಿವಾರಣೆಯ ಮೊದಲ ಹಂತವಾಗಿ. ವಿವಿಧ ರೀತಿಯ ಸಾಲ ಮರುಪಾವತಿಯಲ್ಲಿ ಸುಮಾರು ಮುವತ್ತಾರು ಕೋಟಿ ರೂಪಾಯಿ ಪರಿಹಾರ ಕೊಡಲಾಗಿದೆ.

ಪಕ್ಷಾಂತರ ನಿಷೇಧಿಸುವ ವಿಧೇಯಕವನ್ನು ತಂದಿರುವ. ದೇಶದಲ್ಲೇ ಎರಡನೆಯರಾಜ್ಯ–ಕರ್ನಾಟಕ.

ಭ್ರಷ್ಟಾಚಾರದ ಮೂಲೋತ್ಪಾಟನೆಗೆ ತೀವ್ರಕ್ರಮ–ಲೋಕ ಆಯುಕ್ತದ ರಚನೆ.

ವೃದ್ಧಾಪ್ಯವೇತನ ಹಾಗೂ ಅಂಗವಿಕಲರಿಗೆ ಕೊಡುವ ಮಾಸಾಶನವನ್ನು ಐವತ್ತು ರೂಪಾಯಿಗೆ ಹೆಚ್ಚಿಸಲಾಗಿದೆ.

ಜನತೆಯ ಕುಂದುಕೊರತೆಗಳನ್ನು ವಿಚಾರಿಸಲು ಪ್ರತ್ಯೇಕ ಮಂತ್ರಿ ಶಾಖೆಯನ್ನೇ ರಚಿಸಿದೆ.

ಕನ್ನಡವನ್ನು ಎಲ್ಲ ಮಟ್ಟದಲ್ಲೂ ಆಡಳಿತ ಭಾಷೆಯಾಗಿ ಮಾಡಿರುವುದು ಮಾತ್ರವಲ್ಲ. ಇದು ಕಳೆದ ಫೆಬ್ರವರಿ 15 ರಿಂದ ಕಡ್ಡಾಯವಾಗಿ, ಯಶಸ್ವಿಯಾಗಿ ಕಾರ್ಯಗತವಾಗುತ್ತಿದೆ,

ಪ್ರಕಟಣೆ :

**ವಾರ್ತಾ ಮತ್ತು ಪ್ರಚಾರ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.**

SAMANYA GNANA, Kannada Monthly. May 1983 Price 75 p, Regd. No. KRNB 183



—ಗೆ

ಶ್ರೀಮತಿ/ಶ್ರೀ P. Srinivasa Murthy M.A

18, III cross Kodandarampuram

Bangalore - 3

# ಸಾಮಾನ್ಯ ಜ್ಞಾನ